# ಶ್ರೀ ಹರಿಕಥಾಮೃತಸಾರ

ನಾಗರಾಜು ಹಾವೇರಿ, ಪಲ್ಲವೀಪ್ರಿಯ, ಬೆಂಗಳೂರು – 99010 52578

ಶ್ರೀಹರಿಕಥಾಮೃತಸಾರವನ್ನು ಶ್ರೀವಿಜಯದಾಸರ ಹಾಗೂ ಶ್ರೀಗೋಪಾಲದಾಸರ ಅನುಗ್ರಹ ಮತ್ತು ಶ್ರೀಹರಿವಾಯುಗುರುಗಳ ಪರಮಾನುಗ್ರಹದಿಂದ ಶ್ರೀಜಗನ್ನಾಥದಾಸರು ರಚಿಸಿದ ಕೃತಿರತ್ನ ಶ್ರೀಹರಿಕಥಾಮೃತಸಾರ. ಶ್ರೀಹರಿಕಥಾಮೃತಸಾರ ಭಾಮಿನೀ ಷಟ್ಪದಿಯಲ್ಲಿರುವ ಕೃತಿರತ್ನ. ಇದರಲ್ಲಿ ಒಟ್ಟು 32 ಸಂಧಿಗಳು 988 ಪದ್ಯಗಳು ಇವೆ. ಶ್ರೀಹರಿಕಥಾಮೃತಸಾರ ಅದರ ಹೆಸರೇ ಸೂಚಿಸುವಂತೆ ಶ್ರೀಹರಿಯ ಸರ್ವೋತ್ತಮತ್ವವನ್ನು ನಿರೂಪಿಸುವಂತದ್ದು.

| ***ಸಂಧಿಗಳ ಹೆಸರುಗಳು*** | ***ಪದ್ಯಗಳ ಸಂಖ್ಯೆ*** |
|---|---|
| *ಮಂಗಳಾಚರಣ ಸಂಧಿ* | *೧೩* |
| *ಕರುಣಾಸಂಧಿ* | *೩೧* |
| *ವ್ಯಾಪ್ತಿಸಂಧಿ* | *೩೨* |
| *ಭೋಜನಸಂಧಿ* | *೩೦* |
| *ವಿಭೂತಿಸಂಧಿ* | *೪೦* |
| *ಪಂಚಮಹಾಯಜ್ಞಸಂಧಿ* | *೩೫* |
| *ಪಂಚತನ್ಮಾತ್ರಾಸಂಧಿ* | *೩೩* |
| *ಮಾತೃಕಾಸಂಧಿ* | *೩೨* |
| *ವರ್ಣಪ್ರಕ್ರಿಯಾಸಂಧಿ* | *೩೧* |
| *ಸರ್ವಪ್ರತೀಕಸಂಧಿ* | *೨೫* |

| | |
|---|---|
| ಧ್ಯಾನಪ್ರಕ್ರಿಯಾಸಂಧಿ | ೩೨ |
| ನಾಡೀಸಂಧಿ | ೪೫ |
| ನಾಮಸ್ಮರಣಸಂಧಿ | ೩೩ |
| ಜೀವನಪ್ರಕ್ರಿಯಾಸಂಧಿ | ೩೧ |
| ಶ್ವಾಸಸಂಧಿ | ೨೯ |
| ದತ್ತಸ್ವಾತಂತ್ರ್ಯಸಂಧಿ | ೧೫ |
| ಸ್ವಾತಂತ್ರ್ಯವಿಭಜನಸಂಧಿ | ೩೭ |
| ಬಿಂಬೋಪಸನಾಸಂಧಿ | ೩೧ |
| ಸ್ತೋತ್ರಸಂಧಿ | ೩೫ |
| ಅವರೋಹಣತಾರತಮ್ಯಸಂಧಿ | ೦೭ |
| ಆವೇಶಾವತಾರಸಂಧಿ | ೫೭ |
| ಭಕ್ತಾಪರಾಧಸಹಿಷ್ಣುಸಂಧಿ | ೩೫ |
| ಬೃಹತ್ತಾರತಮ್ಯಸಂಧಿ | ೨೯ |
| ಕಲ್ಪಸಾಧನಸಂಧಿ | ೬೩ |
| ಕ್ರೀಡಾವಿಲಾಸಸಂಧಿ | ೪೦ |
| ಆರೋಹಣತಾರತಮ್ಯಸಂಧಿ | ೧೯ |
| ದೇವತಾನುಕ್ರಮಣಿಕಾಸಂಧಿ | ೦೫ |
| ವಿಘ್ನೇಶ ಸಂಧಿ | ೨೧ |
| ಅಣುತಾರತಮ್ಯಸಂಧಿ | ೧೬ |
| ದೈತ್ಯತಾರತಮ್ಯಸಂಧಿ | ೨೫ |
| ನೈವೇದ್ಯಪ್ರಕರಣಸಂಧಿ | ೨೫ |
| ಕಕ್ಷಾತಾರತಮ್ಯಸಂಧಿ | ೩೬ |

***೩೨ ಸಂಧಿಗಳು    ೯೮೮ ಪದ್ಯಗಳು***

ಸಂಸ್ಕೃತ ಭಾಷೆಯನ್ನು ಹೊರತು ಪಡಿಸಿ ಬೇರೇ ಭಾಷೆಗಳನ್ನು ತಿರಸ್ಕರಿಸಿದ ಶ್ರೀ ಶ್ರೀನಿವಾಸಾಚಾರ್ಯರು ಮುಂದೆ ಶ್ರೀಜಗನ್ನಾಥದಾಸರು ವೇದ, ಉಪನಿಷತ್, ಪುರಾಣ, ಇತಿಹಾಸ, ವ್ಯಾಸಸಾಹಿತ್ಯದಲ್ಲಿ ಬರುವ ಎಲ್ಲಾ ಪ್ರಮೇಯಗಳನ್ನು ಪಾಮರರಿಗೂ ಅರ್ಥವಾಗುವ ಹಾಗೆ ಅಚ್ಚ ಕನ್ನಡ ಭಾಷೆಯಲ್ಲಿ ತಮ್ಮ ಮೇರು ಕೃತಿರತ್ನವಾದ ಶ್ರೀಹರಿಕಥಾಮೃತಸಾರವನ್ನೂ, ಇನ್ನೂ ಅನೇಕ ಪದ_ಪದ್ಯಗಳನ್ನು ಕನ್ನಡದಲ್ಲೇ ರಚಿಸಿ ಹರಿದಾಸ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಆದ್ದರಿಂದ ಎಲ್ಲಾ ಮಾಧ್ವಬಂಧುಗಳು ಅರ್ಥ ಸಹಿತವಾಗಿ ಶ್ರೀಹರಿಕಥಾಮೃತಸಾರ ಪಾರಾಯಣ ಮಾಡುವುದಕ್ಕೆ ಅನುಕೂಲವಾಗುವ ರೀತಿಯಲ್ಲಿ ಕನ್ನಡದಲ್ಲಿ ತಿಳಿಸುವ ಪ್ರಯತ್ನವಿಲ್ಲಿದೆ. ಎಲ್ಲಾ ಮಾಧ್ವಬಂಧುಗಳು ಸಹೃದಯದಿಂದ ಸ್ವೀಕರಿಸಿ ಶ್ರೀಜಗನ್ನಾಥದಾಸಾಂತರ್ಗತ ಶ್ರೀರಾಘವೇಂದ್ರತೀರ್ಥಗುರ್ವಂತರ್ಗತ ಭಾರತೀರಮಣ–ಮುಖ್ಯಪ್ರಾಣಾಂತರ್ಗತ ಶ್ರೀಮನ್ಮೂಲರಘುಪತಿ ವೇದವ್ಯಾಸದೇವರ ಅನುಗ್ರಹಕ್ಕೆ ಪಾತ್ರಾರಾಗುವುದು.